**ಪೋಸ್ಟರ್**

***ನಿಮ್ಮ ಹಿತ್ತಲಿನಲ್ಲಿರುವ ಜೀವಜಗತ್ತು***

# ಹೂಗಳ ಕೆಲವು ಆಸಕ್ತಿಕರ ಪರಿಮಳಗಳು

– ವಿ ಎಸ್ ಪ್ರಗಧೀಶ್ ಮತ್ತು ಶಾನ್ನನ್ ಓಲ್ಸನ್

ನಮಗೆ ಆಪ್ತವೆನಿಸಿದ ಕೆಲವು ಸಾಮಾನ್ಯವಾಗಿ ಕಂಡುಬರುವ ಹೂವುಗಳ ಸುಗಂಧಗಳು ಇಲ್ಲಿವೆ. ಇವುಗಳಲ್ಲಿ ಎಷ್ಟನ್ನು ನೀವು ಗುರುತಿಸಬಲ್ಲಿರಿ?

**ನಿಂಬೆ ಜಾತಿಯ ಪರಿಮಳ (ಸಿಟ್ರಸಿ):**
ನಿಂಬೆ ಹಣ್ಣು ಅಥವಾ ಕಿತ್ತಳೆ ಹಣ್ಣಿನ ಪರಿಮಳವನ್ನು ಹೋಲುವ ಈ ಸುಗಂಧವು ಬೀಟಾ ಮಿರ್ಸೀನ್, ಲಿಮೋನೀನ್, ಲಿನಲೂಲ್ ಮತ್ತು ಸಿಟ್ರಾಲ್‌ನಂತಹ ರಾಸಾಯನಿಕ ಸಂಯುಕ್ತಗಳ ಸಂಯೋಜನೆಯಾಗಿದೆ. ಸಿಟ್ರೋನೆಲ್ಲ, ಲೆಮನ್‌ಗ್ರಾಸ್ ಮತ್ತು ಬರ್ಗಾಮೋಟ್ ಸಸ್ಯದ ಹೂವುಗಳಲ್ಲಿ ಈ ಪರಿಮಳವಿರುತ್ತದೆ.

ಸಿಟ್ರಸ್ ಹೂವಿನ ಮೇಲೆ ನೊಣ

ರಾಸಾಯನಿಕ ಘಟಕಗಳು – ಬೀಟಾ ಮಿರ್ಸೀನ್, ಲಿಮೋನೀನ್, ನೆರಾಲ್, ಲಿನಲೂಲ್, ಜೆರಾನಿಯಲ್

**ಹಣ್ಣಿನಂತಹ ಪರಿಮಳ (ಫ್ರೂಟಿ):**
ಸಿಹಿಯಾದ, ಮನಮುದಗೊಳಿಸುವ ಮತ್ತು ಪ್ರಬಲ ಸುಗಂಧಗಳೆಲ್ಲವೂ ಆಲ್ಕೋಹಾಲ್‌ಗಳು, ಎಸ್ಟರ್‌ಗಳು ಮತ್ತು ಲಾಕ್ಟೋನ್‌ಗಳಂತಹ ರಾಸಾಯನಿಕ ಸಂಯುಕ್ತಗಳ ಸಂಯೋಜನೆಯಾಗಿರುತ್ತವೆ. ಈ ವಿಶಿಷ್ಟ ಪರಿಮಳಗಳ ಸುಳಿವಿನ ಮೂಲಕ ಈ ಕೆಲವು ಬಗೆಯ ಹೂವುಗಳನ್ನು ದೂರದಿಂದಲೇ ಗುರುತಿಸಲು ಸಾಧ್ಯವಾಗುತ್ತದೆ.

ಒಂದು ಯಾಂಗ್ ಯಾಂಗ್ ಹೂವು

ರಾಸಾಯನಿಕ ಘಟಕಗಳು: 2 ಪೆಂಟೈಲ್ ಅಸಿಟೇಟ್, 1 ಹೆಪ್ಟೆನ್ 3 ಆಲ್, ಬೀಟಾ ಉನ್‌ಡೆಕಲಾಕ್ಟೋನ್

**ಕರ್ಪೂರದಂತಹ ಪರಿಮಳ (ಕಾಂಫರಸ್):**

ಒಂದು ತೀಕ್ಷ್ಣ ಮತ್ತು ತಂಪಾದ ಪರಿಮಳ; ಕರ್ಪೂರ, 1.8–ಸಿನೆಯೋಲ್ ಮತ್ತು ಪೈನೀನ್‌ಗಳಂತಹ ರಾಸಾಯನಿಕ ಸಂಯುಕ್ತಗಳು ಈ ಪರಿಮಳಕ್ಕೆ ಕಾರಣ. ರೋಸ್‌ಮೇರಿಯ ಹೂವುಗಳು, ಎಲೆಗಳು ಮತ್ತು ಕಾಂಡಗಳಲ್ಲಿ ಈ ಪರಿಮಳ ನಮ್ಮ ಅನುಭವಕ್ಕೆ ಸಿಗುತ್ತದೆ.

ರಾಸಾಯನಿಕ ಘಟಕಗಳು: ಕರ್ಪೂರ, 1.8–ಸಿನೆಯೋಲ್

ರೋಸ್‌ಮೇರಿ ಗಿಡದ ಹೂವುಗಳು ಮತ್ತಿತರ ತೆರೆದ ಭಾಗಗಳು

**ಗುಲಾಬಿಯಂತಹ ಪರಿಮಳ (ರೋಸ್):**
ರೋಸ್ ಆಕ್ಸೈಡ್, ಬೀಟಾ ಡಮಸೆನೋನ್, ಫೀನೈಲ್ ಇಥನಾಲ್, ಜೆರಾನಿಯೋಲ್, ನೆರಾಲ್ ಮತ್ತು ಸಿಟ್ರೋನೆಲ್ಲಾಲ್‌ನಂತಹ ರಾಸಾಯನಿಕಗಳು ಉಂಟುಮಾಡುವ ಒಂದು ವಿಶಿಷ್ಟ ಪರಿಮಳ. ಜೆರಾನಿಯಮ್‌ನ(*ಪೆಲಾರ್ಗೋನಿಯಮ್ ಗ್ರಾವಿಯೋಲೆನ್ಸ್)* ಎಲೆಗಳು ಮತ್ತು ಕಾಂಡಗಳೂ ಕೂಡ ಈ ರಾಸಾಯನಿಕಗಳನ್ನು ಉತ್ಪತ್ತಿಮಾಡುತ್ತವೆ. ಐತಿಹಾಸಿಕವಾಗಿ ಸುಗಂಧದ್ರವ್ಯಗಳು, ಆಹಾರೋತ್ಪನ್ನ ಮತ್ತು ಸಮಾರಂಭಗಳಲ್ಲಿ ಹೆಚ್ಚು ಆದ್ಯತೆ ಪಡೆದ ಪರಿಮಳವಿದು. ಗುಲಾಬಿಯ ದಳಗಳಿಂದ ಮಾಡಲಾದ ಪರಿಮಳದ್ರವ್ಯಕ್ಕೆ (ಅತ್ತರ್) ಸುಗಂಧದ್ರವ್ಯ ಉದ್ಯಮದಲ್ಲಿ ಭಾರೀ ಬೇಡಿಕೆ ಇದೆ.

ರಾಸಾಯನಿಕ ಘಟಕಗಳು: ರೋಸ್ ಆಕ್ಸೈಡ್,  ನೆರಾಲ್, ಬೀಟಾ ಡಮಸೆನೋನ್, ಜೆರಾನಿಯೋಲ್, ಫೀನೈಲ್ ಇಥನಾಲ್, ಸಿಟ್ರೋನೆಲ್ಲಾಲ್

ಒಂದು ಗುಲಾಬಿ ಹೂವು

**ಬಿಳಿ ಹೂವಿನ ಆಘ್ರಾಣಕ ಚಿತ್ರಿಕೆ:**
ಈ ವಿಶಿಷ್ಟ ಸುಗಂಧಕ್ಕೆ ಕಾರಣವಾಗುವ ರಾಸಾಯನಿಕ ಸಂಯುಕ್ತಗಳೆಂದರೆ ಲಿನಲೂಲ್, ಜೊತೆಗೆ, ಪರಿಮಳಯುಕ್ತ ಎಸ್ಟರ್‌ಗಳಾದ ಬೆನ್ಝೈಲ್ ಅಸಿಟೇಟ್, ಮೀಥೈಲ್ ಬೆನ್ಝೋವೇಟ್, ಸಾರಜನಕಯುಕ್ತ ಇಂಡೋಲ್ ಮತ್ತು ಆಕ್ಸೈಮ್‌ಗಳು. ಹೆಚ್ಚಾಗಿ ಮಲ್ಲಿಗೆ, ಈವ್ನಿಂಗ್ ಪ್ರಿಮ್‌ರೋಸ್‌ನಂತಹ ರಾತ್ರಿ ಹೊತ್ತು ಅರಳುವ ಬಿಳಿ ಹೂವುಗಳಲ್ಲಿ ಇವು ಕಂಡುಬರುತ್ತವೆ. ನಿಶಾಚರಿ ಪರಾಗಸ್ಪರ್ಶಕಗಳನ್ನು ಸೆಳೆಯುವಲ್ಲಿ ಇವು ಸಹಾಯ ಮಾಡುತ್ತವೆ.

ಪತಂಗವೊಂದು ಭೇಟಿಯಿತ್ತಿರುವ ಮಲ್ಲಿಗೆ ಹೂವು.

ರಾಸಾಯನಿಕ ಘಟಕಗಳು:  ಲಿನಲೂಲ್, ಬೆನ್ಝೈಲ್ ಅಸಿಟೇಟ್, ಇಂಡೋಲ್

*ವಿ ಎಸ್ ಪ್ರಗಧೀಶ್‌ರವರು ಕೊಲ್ಕತ್ತಾದ ಸಿಎಸ್ಐಆರ್–ಐಐಸಿಬಿಯಲ್ಲಿ ವಿಜ್ಞಾನಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಪ್ರಗಧೀಶ್‌ಅವರನ್ನು ತಠಿಡಿಚಿಠಿಂಚಿಜುಜಝು@ರಟಚುಟ.ಛಿಠಟ. ಮೂಲಕ ಸಂಪರ್ಕಿಸಬಹುದು.*

*ಶಾನ್ನನ್ ಓಲ್ಸನ್‌ರವರು ಸಹ ಪ್ರಾಧ್ಯಾಪಕರಾಗಿದ್ದು, ಟಾಟಾ ಮೂಲಭೂತ ಸಂಶೋಧನಾ ಸಂಸ್ಥೆಯ ರಾಷ್ಟ್ರೀಯ ಜೈವಿಕ ವಿಜ್ಞಾನ ಕೇಂದ್ರದಲ್ಲಿನ ನಿಸರ್ಗವಾದಿಯಿಂದ ಸ್ಪೂರ್ತಿ ಪಡೆದ ರಾಸಾಯನಿಕ ಪರಿಸರ ವಿಜ್ಞಾನದ ಪ್ರಯೋಗಾಲಯವನ್ನು ಮುನ್ನಡೆಸುತ್ತಿದ್ದಾರೆ. ಇವರನ್ನು shannon@nice.ncbs.res.in ಮೂಲಕ ಸಂಪರ್ಕಿಸಬಹುದು.*

ಅನುವಾದ:
ಕ್ಷಮಾ.ವಿ.ಭಾನುಪ್ರಕಾಶ್

*******************************************************************************************************